# ಕರ್ನಾಟಕ ವಿಧಾನ ಪರಿಷತ್ತು

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1485

2) ಸದಸ್ಯರ ಹೆಸರು : ಶ್ರೀ ಎಸ್.ಎಸ್.ಬೋಸ್‌ರಾಜು (ವಿಧಾನಸಭೆಯಿಂದ ಚುನಾಯಿತರಾದವರು)

3) ಉತ್ತರಿಸುವ ದಿನಾಂಕ : 28-02-2018

4) ಉತ್ತರಿಸಬೇಕಾದ ಸಚಿವರು : ಯುವ ಸಬಲೀಕರಣ ಮತ್ತು ಕ್ರೀಡಾ ಹಾಗೂ ಮೀನುಗಾರಿಕೆ ರಾಜ್ಯ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಯಚೂರು ಜಿಲ್ಲೆಯಲ್ಲಿರುವ ವಿವಿಧ ಕೆರೆಗಳಲ್ಲಿ ಮೀನುಗಾರಿಕೆ ಅಭಿವೃದ್ಧಿ ಮಾಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ರಾಯಚೂರು ಜಿಲ್ಲೆಯಲ್ಲಿ ಇರುವ ಸರ್ಕಾರಿ ಸ್ವಾಮ್ಯದ ಕೆರೆಗಳನ್ನು ನೇರ ಗುತ್ತಿಗೆ ಮುಖಾಂತರ ಗರಿಷ್ಟ 5 ವರ್ಷಗಳ ಅವಧಿಗೆ ಅರ್ಹ ಸ್ಥಳೀಯ ಮೀನುಗಾರರ ಸಹಕಾರ ಸಂಘಗಳಿಗೆ ನೀಡುವುದು. ಮೀನುಗಾರರ ಸಂಘಗಳು ಗುತ್ತಿಗೆ ಪಡೆಯದಿದ್ದಲ್ಲಿ, ಸದರಿ ಕೆರೆಗಳನ್ನು ಟೆಂಡರ್-ಕಂ-ಹರಾಜು ಮೂಲಕ ಗರಿಷ್ಟ 5 ವರ್ಷಗಳ ಅವಧಿಗೆ ವಿಲೇವಾರಿ ಮಾಡಿ ಮೀನುಗಾರಿಕೆ ಚಟುವಟಿಕೆಗಳನ್ನು ಕೈಗೊಳ್ಳಲಾಗುತ್ತಿದೆ. |
| ಆ) | ರಾಯಚೂರು ಜಿಲ್ಲೆಯಲ್ಲಿರುವ ಮೀನುಗಾರರಿಗೆ ನೀಡಿರುವ ಸೌಲಭ್ಯಗಳು ಯಾವುವು? | ರಾಯಚೂರು ಜಿಲ್ಲೆಯಲ್ಲಿರುವ ಮೀನುಗಾರರಿಗೆ ಫೈಬರ್‌ಗ್ಲಾಸ್ ಹರಿಗೋಲು ವಿತರಣೆ, ಮೀನುಮರಿ ಖರೀದಿಸಲು ನೆರವು, ಮೀನುಗಾರಿಕೆ ಸಲಕರಣೆ ಕಿಟ್ಟುಗಳ ವಿತರಣೆ, ಮತ್ಸ್ಯಾಶ್ರಯ ಯೋಜನೆ, ಮೀನು ಕೃಷಿ ಕೊಳ ನಿರ್ಮಾಣಕ್ಕೆ ಸಹಾಯಧನ, ಮೀನು ಸಾಕಾಣಿಕೆ ಮತ್ತು ಮಾರಾಟಕ್ಕೆ ನಾಲ್ಕು ಚಕ್ರ ವಾಹನ ಖರೀದಿಗೆ ಸಹಾಯಧನ, ಮೀನು ಮಾರಾಟಕ್ಕೆ ದ್ವಿಚಕ್ರ ವಾಹನ, ಶಾಖಾ ನಿರೋಧಕ ಪೆಟ್ಟಿಗೆ ಖರೀದಿಸಲು ಸಹಾಯಧನ ಮತ್ತು ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪಯೋಜನೆಯಡಿ ತಾಲ್ಲೂಕು ಪಂಚಾಯಿತಿ ವತಿಯಿಂದ ಬೈಸಿಕಲ್ ಮತ್ತು ಬಲೆಗಳನ್ನು ಖರೀದಿಸಲು ಶೇ.100 ರಷ್ಟು ಸಹಾಯಧನ ನೀಡಲಾಗುತ್ತಿದೆ. |

ಸಂಖ್ಯೆ: ಪಸಂಮೀ 43 ಮೀಇಇ 2018